# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 94 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಎಂ.ಎ.ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3) | ಉತ್ತರಿಸಬೇಕಾದ ದಿನಾಂಕ | 21/09/2020 |
| 4) | ಉತ್ತರಿಸುವವರು | ಉಪ ಮುಖ್ಯಮಂತ್ರಿಗಳು ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಧಾರ್ಮಿಕ ಅಲ್ಪ ಸಂಖ್ಯಾತರಿಗೆ ಸೇರಿದ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆ (ಐ.ಟಿ.ಐ. ಕಾಲೇಜು) ಗಳು ಧಾರ್ಮಿಕ ಅಲ್ಪ ಸಂಖ್ಯಾತರ ಕಾಲೇಜುಗಳೆಂದು ಸ್ಥಾನಮಾನ ನೀಡುವಂತೆ ಕೋರಿ ಪ್ರಸ್ತಾವನೆಗಳನ್ನು ಸಲ್ಲಿಸಿದ್ದರೂ ಸಹ ಈ ಕಾಲೇಜುಗಳಿಗೆ ಧಾರ್ಮಿಕ ಅಲ್ಪ ಸಂಖ್ಯಾತರ ಶಿಕ್ಷಣ ಸಂಸ್ಥೆ ಎಂದು ಘೋಷಣೆ / ಮಾನ್ಯತೆ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಸಂಬಂಧ ಸರ್ಕಾರವು ಕೈಗೊಂಡಿರುವ ಕ್ರಮಗಳೇನು; (ಆದೇಶಗಳ ಸಹಿತ ವಿವರ ನೀಡುವುದು) | ಅನುದಾನ ಸಂಹಿತೆ 1997 ರ ನಿಯಮಗಳಲ್ಲಿ ಧಾರ್ಮಿಕ ಅಲ್ಪ ಸಂಖ್ಯಾತರಿಗೆ ಸೇರಿದ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆ (ಐ.ಟಿ.ಐ. ಕಾಲೇಜು) ಗಳಿಗೆ ಸಂಬಂಧಿಸಿದಂತೆ ಧಾರ್ಮಿಕ ಅಲ್ಪ ಸಂಖ್ಯಾತರ ಶಿಕ್ಷಣ ಸಂಸ್ಥೆಗಳೆಂದು ಘೋಷಣೆ / ಮಾನ್ಯತೆ ನೀಡುವ ಬಗ್ಗೆ ಯಾವುದೇ ಆದೇಶಗಳಿರುವುದಿಲ್ಲ. |
| ಆ) | ಧಾರ್ಮಿಕ ಅಲ್ಪ ಸಂಖ್ಯಾತರಿಗೆ ಸೇರಿದ ಕೈಗಾರಿಕಾ ತರಬೇತಿ ಸಂಸ್ಥೆ (ಐ.ಟಿ.ಐ. ಕಾಲೇಜು) ಗಳಿಂದ ಧಾರ್ಮಿಕ ಅಲ್ಪ ಸಂಖ್ಯಾತರ ಶಿಕ್ಷಣ ಸಂಸ್ಥೆ ಎಂದು ಘೋಷಿಸಲು / ಮಾನ್ಯತೆ ನೀಡುವಂತೆ ಕೋರಿ ಪ್ರಸ್ತಾವನೆಗಳು ಸ್ವೀಕೃತವಾಗಿವೆಯೇ; ಸ್ವೀಕತವಾಗಿದ್ದಲ್ಲಿ ಇಲ್ಲಿಯವರೆಗೆ ಎಷ್ಟು ಪ್ರಸ್ತಾವನೆಗಳು ಬಂದಿವೆ; ಈ ಪ್ರಸ್ತಾವನೆಗಳು ಸ್ವೀಕೃತವಾದ ದಿನಾಂಕವೇನು; ಸದರಿ ಪ್ರಸ್ತಾವನೆಗಳು ಯಾವ ಹಂತದಲ್ಲಿವೆ; ಎಷ್ಟು ಪ್ರಸ್ತಾವನೆಗಳಿಗೆ ಧಾರ್ಮಿಕ ಅಲ್ಪ ಸಂಖ್ಯಾತರ ಸಂಸ್ಥೆ ಎಂದು ಘೋಷಿಸಲಾಗಿದೆ; (ಕಾಲೇಜುವಾರು ವಿವರ ನೀಡುವುದು) | ಧಾರ್ಮಿಕ ಅಲ್ಪ ಸಂಖ್ಯಾತರಿಗೆ ಸೇರಿದ ಕೈಗಾರಿಕಾ ತರಬೇತಿ ಸಂಸ್ಥೆ (ಐ.ಟಿ.ಐ. ಕಾಲೇಜು) ಗಳಿಂದ ಧಾರ್ಮಿಕ ಅಲ್ಪ ಸಂಖ್ಯಾತರ ಶಿಕ್ಷಣ ಸಂಸ್ಥೆ ಎಂದು ಘೋಷಿಸಲು / ಮಾನ್ಯತೆ ನೀಡುವಂತೆ ಕೋರಿ 01 ಪ್ರಸ್ತಾವನೆ ದಿನಾಂಕ: 24/06/2020 ರಂದು ಸ್ವೀಕೃತವಾಗಿದೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗುತ್ತಿದ್ದು, ಇದುವರೆಗೂ ಯಾವುದೇ ಸಂಸ್ಥೆಯನ್ನು ಧಾರ್ಮಿಕ ಅಲ್ಪ ಸಂಖ್ಯಾತರ ಸಂಸ್ಥೆ ಎಂದು ಘೋಷಿಸಲಾಗಿರುವುದಿಲ್ಲ. |
| ಇ) | ಧಾರ್ಮಿಕ ಅಲ್ಪ ಸಂಖ್ಯಾತರಿಗೆ ಸೇರಿದ ಕೈಗಾರಿಕಾ ತರಬೇತಿ ಸಂಸ್ಥೆ (ಐ.ಟಿ.ಐ. ಕಾಲೇಜು) ಗಳನ್ನು ಧಾರ್ಮಿಕ ಅಲ್ಪ ಸಂಖ್ಯಾತರ ಶಿಕ್ಷಣ ಸಂಸ್ಥೆ ಎಂದು ಘೋಷಿಸಲು / ಸ್ಥಾನಮಾನ ನೀಡಲು ಬೇಕಾಗಿರುವ ಮಾರ್ಗಸೂಚಿಗಳನ್ನು / ಅಧಿಸೂಚನೆಗಳನ್ನು ಹೊರಡಿಸಲಾಗಿದೆಯೇ; ಇಲ್ಲದಿದ್ದಲ್ಲಿ, ಯಾಕೆ ಹೊರಡಿಸಿಲ್ಲ; ಯಾವ ಕಾಲಮಿತಿಯೊಳಗೆ ಮಾರ್ಗಸೂಚಿಗಳನ್ನು ಹೊರಡಿಸಲಾಗುವುದು? (ವಿವರ ನೀಡುವುದು) | ಧಾರ್ಮಿಕ ಅಲ್ಪ ಸಂಖ್ಯಾತರಿಗೆ ಸೇರಿದ ಕೈಗಾರಿಕಾ ತರಬೇತಿ ಸಂಸ್ಥೆ (ಐ.ಟಿ.ಐ. ಕಾಲೇಜು) ಗಳನ್ನು ಧಾರ್ಮಿಕ ಅಲ್ಪ ಸಂಖ್ಯಾತರ ಶಿಕ್ಷಣ ಸಂಸ್ಥೆ ಎಂದು ಘೋಷಿಸಲು / ಸ್ಥಾನಮಾನ ನೀಡಲು ಬೇಕಾಗಿರುವ ಮಾರ್ಗಸೂಚಿಗಳನ್ನು / ಅಧಿಸೂಚನೆಗಳನ್ನು ಹೊರಡಿಸಲಾಗಿರುವುದಿಲ್ಲ. ಯಾಕೆಂದರೆ ಅನುದಾನ ಸಂಹಿತೆ 1997 ರ ನಿಯಮಗಳಲ್ಲಿ ಧಾರ್ಮಿಕ ಅಲ್ಪ ಸಂಖ್ಯಾತರ ಶಿಕ್ಷಣ ಸಂಸ್ಥೆಗಳೆಂದು ಘೋಷಣೆ / ಮಾನ್ಯತೆ ನೀಡುವ ಬಗ್ಗೆ ಯಾವುದೇ ಆದೇಶಗಳಿರುವುದಿಲ್ಲ. |

**ಸಂಖ್ಯೆ: ಕೌಉಜೀಇ 43 ಕೈತಪ್ರ 2020**

(ಡಾ.ಸಿ.ಎನ್.ಅಶ್ವಥ ನಾರಾಯಣ)
ಉಪ ಮುಖ್ಯಮಂತ್ರಿಗಳು ಹಾಗೂ
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು